**6. PROHIBITION OF EXPORT OF SUGARCANE FROM AREA RESERVED TEMPORARILY:-**
No sugarcane shall be exported from the area reserved temporarily except under and in accordance with the conditions of a permit issued by the Deputy Commissioner in Form-I of Schedule-II.

**7. ISSUE OF PERMITS:-**

i. Application for the grant of a permit under Clause-6 shall be made in form 2 of Schedule-II and shall be accompanied by a fee of Rs. 5/- and an amount of Rs. 100/- as security Deposit.

ii. If any condition of the permit is contravened, the Deputy Commissioner may after giving an opportunity to the person concerned to show cause why the amount deposited by way of security or any part thereof may not be forfeited pass order forfeiting the whole or part of the amount deposited as security.

By Order and in the name of the Governor of Karnataka,
**P. Anandakumar**
Desk Officer,
Commerce and Industries Department (I.D.)

**SCHEDULE-I**

Villages of entire Karwar District and all villages of Kalgataki Taluk, Dharwad District, allotted to M/s. Bharat Sugar Mills Ltd., Kesrolli, Haliyal Taluk, U.K. District, temporarily for supply of sugarcane. Earlier villages allotted to Bhagyalakshmi Sahakari Sakkare Karkhane, Khanapur, Malaprabha S.S.K. M.K. Hubli, Karnataka S.S.K. Haveri from Karwar District are temporarily withdrawn and allocated to M/s. Bharat Sugar Mills Ltd., Kesrolli, Haliyal Taluk, U.K. District.

**P. Anandakumar**
Desk Officer,
Commerce and Industries Department (I.D.)

**SCHEDULE-II (Sub-Clause 7)**

Form II, the Karnataka Sugarcane (Regulation of Distribution) M/s. Bharat Sugar Mills Ltd., Kesrolli, Haliyal Taluk, U.K. District order 2004.

Application for the grant of permit for exporting Sugarcane from the area reserved temporarily.

| | | |
|---|---|---|
| 1 | Full name of the Applicant | |
| 2 | Father's Name | |
| 3 | Residential Address in Full | |
| 4 | Quantity of sugarcane for which permit is requested for export | |
| 5 | Area and the village from which sugarcane is intended to be exported | |
| 6 | The purpose for which the export is intended<br>i. For Sale<br>ii. For crushing Sugarcane juce or manufacture of Gur / Sakkare gul / Jaggery / Rabi or Kandhasari for sale or self consumption | |
| 7 | Challan No. and Date amount and treasury of issue of the said challan for having credited the permit fee of Rs. 5/- and the Security Deposit for Rs. 110/- | |

I declare that I am fully aware of the provisions of the Karnataka Sugarcane (Regulation of Distribution) M/s. Bharat Sugar Mills Ltd., Kesrolli, Haliyal Taluk, U.K. District order 2004 and the particulars furnished in the application are true to the best of my knowledge and behalf and the permit to be issued will be properly used for the purpose for which it is issued. I have actually read/go read and understood the conditions of the permit given in Form No. I of the Schedule appended to the Karnataka Sugarcane (Regulation of Distribution) Bharath Sugar Mills Ltd., Kesrolli, order 2004 and I agree to abide by them.

Place:
Dated: **SIGNATURE OF THE APPLICANT**
PR-223

**LABOUR SECRETARIAT**
**NOTIFICATION**
**No. LD 28 LSI 2004, Bangalore, dated 21st February 2004**

In exercise of the powers conferred by Section 87 read with 91-A of the ESI Act (Central Act 34 of 1948) the Government of Karnataka hereby exempts.

1. M/s. Mangalore Ganesh Beedi Works, Mysore
2. M/s. Jyothi Home Industries Pvt. Ltd., Mysore
3. M/s. Bharat Beedi Works Ltd., Mangalore
4. M/s. Anand Tobacco Products, Mangalore
5. M/s. South Kanara Home Industries, Mangalore
6. M/s. Deepak Enterprises, Mangalore
7. M/s. Gurukrupa Beedi Industry Pvt. Ltd., Mangalore
8. M/s. PVS Beedies Pvt. Ltd., Mangalore
9. M/s. Prakash Beedies Ltd., Mangalore
10. M/s. Cannanore Beedies Pvt. Ltd., Mangalore
11. M/s. Southern India Beedi Works Ltd., Puttur
12. M/s. Prabhudas Kishordas Tobacco Products Ltd., Mangalore
13. M/s. Ceejay Tobacco Limited, Ullal, Mangalore
14. M/s. J.P. Tobacco Products Ltd., Uppinangadi
15. M/s. Desai Brothers Ltd., Mangalore

from the operation of the said Act for the period for one year from 1-1-2004 to 31-12-2004 subject to the following conditions viz.,

i. The employer shall maintain a register showing the names and designations of the exempted employees and;
ii. Both the Employer and Employees should contribute to the ESI Scheme with effect from 1-1-2005.

By Order and in the name of the Governor of Karnataka,

PR-224

**H. Viswanath**
Under Secretary to Government,
Labour Department.

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 4 ಎಲ್‌ಡಬ್ಲ್ಯೂಎ 2004, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2004**

ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ 14) ರ ಪ್ರಕಾರ ಕರ್ನಾಟಕದಲ್ಲಿನ ಸಕ್ಕರೆ ಉದ್ದಿಮೆಯನ್ನು ಸಾರ್ವಜನಿಕ ಅಗತ್ಯ ಸೇವೆ ಎಂಬುದಾಗಿ ಅಧಿಸೂಚನೆ ಸಂಖ್ಯೆ: ಕಾಇ 12 ಎಲ್‌ಎಂಡಬ್ಲ್ಯೂ 2003, ದಿನಾಂಕ: 30.5.2003 ರಲ್ಲಿ ಆರು ತಿಂಗಳ ಕಾಲಾವಧಿಯವರೆಗೆ ಜಾರಿಯಲ್ಲಿರುವಂತೆ ಘೋಷಿಸಲಾಗಿತ್ತು. ಈ ಕಾಲಾವಧಿಯು ದಿನಾಂಕ: 29.11.2003 ರಂದು ಕೊನೆಗೊಂಡಿರುತ್ತದೆ.

ಸದರಿ ಉದ್ದಿಮೆಯನ್ನು ಇನ್ನೂ ಆರು ತಿಂಗಳ ಅವಧಿಗೆ ಸಾರ್ವಜನಿಕ ಅಗತ್ಯ ಸೇವೆ ಎಂದು ಘೋಷಿಸುವುದು ಅವಶ್ಯಕವೆಂದು ಸರ್ಕಾರವು ಪರಿಗಣಿಸಿದೆ. ಕೈಗಾರಿಕಾ ವಿವಾದಗಳ ಅಧಿನಿಯಮ 1947ರ (ಕೇಂದ್ರ ಕಾಯ್ದೆ 1947ರ ಸಂಖ್ಯೆ 14) ಕಲಂ 2 ಖಂಡ (ಎನ್) ಉಪಖಂಡ 6ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಕ್ಕರೆ ಉದ್ದಿಮೆಯನ್ನು ಸಾರ್ವಜನಿಕ ಅಗತ್ಯ ಸೇವೆ ಎಂಬುದಾಗಿ ದಿನಾಂಕ: 30.11.2003 ರಿಂದ ಮುಂದಿನ ಆರು ತಿಂಗಳ ಅವಧಿಗೆ ಜಾರಿಯಲ್ಲಿರುವಂತೆ ವಿಸ್ತರಿಸಿ ಈ ಮೂಲಕ ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 225

**ಎಂ.ಬಿ. ಗೋಖಲೆ**
ಪೀಠಾಧಿಕಾರಿ-II, ಕಾರ್ಮಿಕ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಕಾಇ 6 ಎಲ್‌ಡಬ್ಲ್ಯೂಎ 2004, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2004**

ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ 14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ ಅಧಿಸೂಚನೆ ಸಂಖ್ಯೆ: ಕಾಇ 22 ಎಲ್‌ಡಬ್ಲ್ಯೂಎ 2003, ದಿನಾಂಕ: 16.10.2003 ರನ್ವಯ ಇಂಡಸ್ಟ್ರಿ ಜನರೇಟಿಂಗ್ ಪವರ್ ಅನ್ನು ಸಾರ್ವಜನಿಕ ಅಗತ್ಯ ಸೇವೆ ಎಂಬುದಾಗಿ ದಿನಾಂಕ: 27.7.2003 ರಿಂದ ಮುಂದಿನ ಆರು ತಿಂಗಳ ಕಾಲಾವಧಿಯವರೆವಿಗೂ ಜಾರಿಯಲ್ಲಿರುವಂತೆ ಘೋಷಿಸಲಾಗಿತ್ತು.

ಸಾರ್ವಜನಿಕ ಹಿತದೃಷ್ಟಿಯಿಂದ ಇಂಡಸ್ಟ್ರಿ ಜನರೇಟಿಂಗ್ ಪವರ್ ಇನ್ನೂ ಆರು ತಿಂಗಳ ಅವಧಿಯವರೆಗೆ ಸಾರ್ವಜನಿಕ ಅಗತ್ಯ ಸೇವೆ ಎಂಬುದಾಗಿ ಘೋಷಿಸುವುದು ಅವಶ್ಯಕವೆಂದು ಸರ್ಕಾರ ತೀರ್ಮಾನಿಸಿದೆ. ಆದುದರಿಂದ ಕರ್ನಾಟಕ ಸರ್ಕಾರವು ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರ ಕಾಯ್ದೆ 1947ರ ಸಂಖ್ಯೆ 14) ಕಲಂ 2 ಖಂಡ (ಎನ್) ಉಪಖಂಡ 6ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಇಂಡಸ್ಟ್ರಿ ಜನರೇಟಿಂಗ್ ಪವರ್ ಯನ್ನು ಸಾರ್ವಜನಿಕ ಅಗತ್ಯ ಸೇವೆ ಎಂಬುದಾಗಿ ದಿನಾಂಕ: 27.1.2004 ರಿಂದ ಮುಂದಿನ ಆರು ತಿಂಗಳ ಅವಧಿಗೆ ಜಾರಿಯಲ್ಲಿರುವಂತೆ ವಿಸ್ತರಿಸಿ ಈ ಮೂಲಕ ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 226

**ಎಂ.ಬಿ. ಗೋಖಲೆ**
ಪೀಠಾಧಿಕಾರಿ-II, ಕಾರ್ಮಿಕ ಇಲಾಖೆ.

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ
## ತಿದ್ದುಪಡಿ ಆದೇಶ
### ಸಂಖ್ಯೆ: ಕೃತೋಇ 57 ತೋಯೋಕಾ 2004, ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2004

ಸರ್ಕಾರದ ಆದೇಶ ಸಂಖ್ಯೆ: ಕೃತೋಇ 301 ತೋಯೋಕಾ 2003, ದಿನಾಂಕ: 17.10.2003 ರಲ್ಲಿ ಆದೇಶದ ಭಾಗದ ಅಂಶ 5 ಮತ್ತು 6ನ್ನು ತಿದ್ದುಪಡಿಮಾಡಲಾಗಿದ್ದು ಈ ಕೆಳಗಿನಂತೆ ಓದಿಕೊಳ್ಳುವುದು.

"ಅಂಶ-5: ಪ್ರತಿ ಫಲಾನುಭವಿಗೆ ಪ್ರತಿ ಹೆಕ್ಟೇರ್‌ಗೆ ರೂ. 1000 ದರದ ಆಧಾರದ ಮೇರೆಗೆ ಗಿಡಗಳನ್ನು ಒದಗಿಸಬಹುದು ಅಥವಾ ಪ್ರತಿ ಫಲಾನುಭವಿಗೆ ತರಕಾರಿ ಬಿತ್ತನೆ ಬೀಜವನ್ನು ಗರಿಷ್ಠ ಒಂದು ಹೆಕ್ಟೇರ್‌ಗೆ ಬೇಕಾಗುವ ಪ್ರಮಾಣ ಅಥವಾ ರೂ. 1000 ಇವೆರಡರಲ್ಲಿ ಯಾವುದು ಕಡಿಮೆಯೋ ಅಷ್ಟು ಮೌಲ್ಯದ ಬಿತ್ತನೆ ಬೀಜಗಳನ್ನು ಒದಗಿಸುವುದು."

ಮೇಲಿನ ತಿದ್ದುಪಡಿಯ ಪರಿಣಾಮವಾಗಿ ಅಂಶ-6ರ ಭೌತಿಕ ಗುರಿಗಳಡಿ ತರಕಾರಿ ಬಿತ್ತನೆ ಬೀಜ ವಿತರಣೆಯಲ್ಲಿ ಫಲಾನುಭವಿಗಳ ಸಂಖ್ಯೆಯನ್ನು 5000 ಎಂದು ಓದಿಕೊಳ್ಳತಕ್ಕದ್ದು.

ಉಳಿದಂತೆ, ಸದರಿ ಆದೇಶದ ಇತರೆ ಅಂಶಗಳು ಅಂತೆಯೇ ಜಾರಿಯಲ್ಲಿರುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಮಂಜುಳಗೀತ**
ಪಿ.ಆರ್. 228
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## LAW SECRETARIAT
## NOTIFICATION
### No. LAW 5746 LCM 2003, Bangalore, dated 20th February 2004

In exercise of powers conferred by the Sub-section (8) of Section 24 of the Code of Criminal Procedure 1973 (Central Act, No. 2 of 1974, as amended by the Code of Criminal Procedure (Amendment Act 1978) and Rule 30 of the Karnataka Law Officers (Appointment and Condition of Services) Rule 1977, Sri M.T. Nanaiah, Advocate has been appointed as Special Counsel to conduct the case in C.C. No. 347/2002 (arising out of Crime No. 78/2002 of J.C. Nagar Police Station, Bangalore) on the file of the C.M.M. Court, Bangalore.

The Remuneration fee of Sri M.T. Nanaiah, Advocate shall be paid by the complainant Smt. Yasmeen Banu.

By Order and in the name of the Governor of Karnataka,
PR-229
**Vineetha P Shetty**
Asst. Solicitor and Ex. Officio,
Under Secretary to Government,
Law Department (LIT. I)

## ಕಾನೂನು ಸಚಿವಾಲಯ
## ಅಧಿಸೂಚನೆ
### ಸಂಖ್ಯೆ: ಲಾ 19 ಎಲ್‌ಎಜಿ 2004, ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2004

ಶ್ರೀ ಅರುಣಕುಮಾರ ಸು. ಯಲಿಗಾರ, ವಕೀಲರು, ಧಾರವಾಡ ಇವರನ್ನು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಈ ವಿಷಯದಲ್ಲಿ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕ ಮತ್ತು ಸೇವಾ ಷರತ್ತುಗಳು) ನಿಯಮ 1977ರ ಷರತ್ತುಗಳಿಗೆ ಒಳಪಟ್ಟು ಧಾರವಾಡದ ಎರಡನೇ ಜಿಲ್ಲಾ ಅಪರ ಸರ್ಕಾರಿ ವಕೀಲರನ್ನಾಗಿ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕಹನುಮಂತಯ್ಯ**
ಪಿ.ಆರ್. 230
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ (ಆಡಳಿತ-1)

## ಅಧಿಸೂಚನೆ
### ಸಂಖ್ಯೆ: ಲಾ 63 ಎಲ್‌ಎಜಿ 2003, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2004

ಶ್ರೀ ಪಾಲನೇತ್ರ, ವಕೀಲರು, ಶ್ರೀಕಂಠಪುರಿ ಬಡಾವಣೆ, ನಂಜನಗೂಡು, ಇವರನ್ನು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಮೂರು ವರ್ಷಗಳ ಅವಧಿಗೆ ಅಥವಾ ಈ ವಿಷಯದಲ್ಲಿ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಗಳು ಮತ್ತು ಸೇವಾ ಷರತ್ತುಗಳು) ನಿಯಮ 1977ರ ಷರತ್ತುಗಳಿಗೆ ಒಳಪಟ್ಟು ನಂಜನಗೂಡು ಅಪರ ಸರ್ಕಾರಿ ವಕೀಲರನ್ನಾಗಿ ನೇಮಕ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕಹನುಮಂತಯ್ಯ**
ಪಿ.ಆರ್. 231
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ (ಆಡಳಿತ-1)

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 08 ಸಿಎನ್‌ಎಸ್ 2004, ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮ ನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು, ಉತ್ತರ ಕನ್ನಡ ಜಿಲ್ಲೆ ಭಟ್ಕಳ ತಾಲ್ಲೂಕಿನ ಕ್ವಾಕಿಣೆ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಕ್ವಾಕಿಣೆ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀ ಮಂಜುನಾಥ ದುರ್ಗಯ್ಯ ದೇವಾಡಿಗ, ಕಂಬಳೂರು, ಕ್ವಾಕಿಣೆ, ಭಟ್ಕಳ

2) ಶ್ರೀ ನಾಗೇಶ ಮಂಜು ಹಳ್ಳೇರ, ತೆರ್ನಮಕ್ಕಿ, ಕ್ವಾಕಿಣೆ, ಭಟ್ಕಳ

3) ಶ್ರೀಮತಿ ಮಂಜಮ್ಮ ಕೋಂ ಮಂಜಪ್ಪ ನಾಯ್ಕ, ಬೆಂಗ್ರೆ ಮೀನಿನ ಮನೆ, ಪೊ: ಉಳ್ಮಣ್ಣು, ಭಟ್ಕಳ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 232 ವಿಶೇಷ ಕರ್ತವ್ಯಾಧಿಕಾರಿ,

ಸಹಕಾರ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 17 ಸಿಎನ್‌ಎಸ್ 2004, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 165 ಎನ್‌ಎಂಎಸ್ 2001 ದಿನಾಂಕ: 11.12.2000ರಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಪಿ.ಆರ್. ಕೃಷ್ಣಪ್ಪ, ಪಣತ್ತೂರು ಮತ್ತು ಅಂಚೆ, ಬೆಂಗಳೂರು ದಕ್ಷಿಣ ತಾಲ್ಲೂಕು ರವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ಕೆ.ಆರ್. ಗೋವಿಂದರಾಜು ಬಿನ್ ರಂಗನಾರಾಯಣಪ್ಪ, ಶ್ರೀನಿವಾಸಪುರ, ಕೆ. ಗೊಲ್ಲಹಳ್ಳಿ ಅಂಚೆ, ಕೆಂಗೇರಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು ಅವರನ್ನು ಬೆಂಗಳೂರು ದಕ್ಷಿಣ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಜಾಪಾಲಿ**

ಪಿ.ಆರ್. 233 ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

### ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 25 ಸಿಎನ್‌ಎಸ್ 2004, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 88 ಎನ್‌ಎಂಎಸ್ 2000 ದಿನಾಂಕ: 14.9.2000 ರಲ್ಲಿ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ ನಿಯಮಿತ, ಕನ್ನಿಂಗ್‌ಹ್ಯಾಮ್ ರಸ್ತೆ, ಬೆಂಗಳೂರು, ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಪ. ಶಿವಪ್ಪ ಗೊಲ್ಲರಹಳ್ಳಿ, ಗಂಡಸಿ ಹೋಬಳಿ, ಅರಸೀಕೆರೆ ತಾಲ್ಲೂಕು, ಹಾಸನ ಜಿಲ್ಲೆ ರವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 53ಎ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ಎಂ. ಮಾದಪ್ಪ ಬಿನ್ ಮುದ್ದೇಗೌಡ, ಮಧುವನಹಳ್ಳಿ, ಕೆ.ಆರ್. ನಗರ ತಾಲ್ಲೂಕು, ಮೈಸೂರು ಜಿಲ್ಲೆ ಇವರನ್ನು ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ ನಿಯಮಿತ, ಕನ್ನಿಂಗ್‌ಹ್ಯಾಮ್ ರಸ್ತೆ, ಬೆಂಗಳೂರು ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 234 ವಿಶೇಷ ಕರ್ತವ್ಯಾಧಿಕಾರಿ,

ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 25 ಸಿಎನ್‌ಎಸ್ 2004, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 88 ಎನ್‌ಎಂಎಸ್ 2000 ದಿನಾಂಕ: 3.12.2001 ರಲ್ಲಿ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ ನಿಯಮಿತ, ಕನ್ನಿಂಗ್‌ಹ್ಯಾಮ್ ರಸ್ತೆ, ಬೆಂಗಳೂರು, ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ವೀರಣ್ಣಗೌಡ ಅಲಿಯಾಸ್ ಚಂದ್ರಶೇಖರ, ಶೆಟ್ಟಿಕೆರೆದೊಡ್ಡಿ ಉಯ್ಯಂಬಳ್ಳಿ ಹೋಬಳಿ, ಕನಕಪುರ ತಾ, ಬೆಂಗಳೂರು, ರವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 53ಎ ಮೇರೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ಜಯರಾಮೇಗೌಡ ಬಿನ್ ಬೋರಲಿಂಗೇಗೌಡ, ವಕೀಲರು, ಬ್ಯಾಡರಹಳ್ಳಿ, ಕೆ.ಆರ್. ನಗರ ತಾಲ್ಲೂಕು, ಮೈಸೂರು ಜಿಲ್ಲೆ, ಇವರನ್ನು ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳ ನಿಯಮಿತ, ಕನ್ನಿಂಗ್‌ಹ್ಯಾಮ್ ರಸ್ತೆ ಬೆಂಗಳೂರು ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 235 ವಿಶೇಷ ಕರ್ತವ್ಯಾಧಿಕಾರಿ,

ಸಹಕಾರ ಇಲಾಖೆ.

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 84 ಎಲ್‌ಆರ್‌ಎ 2003, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2004**

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 48(1)(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 21 ಎಲ್‌ಆರ್‌ಎ 2002 ದಿನಾಂಕ: 30.3.2003 ರಲ್ಲಿ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಗುಲ್ಬರ್ಗಾ ಅವರನ್ನು ಚಿತ್ತಾಪುರ ಭೂ ನ್ಯಾಯ ಮಂಡಳಿಯ ಅಧ್ಯಕ್ಷರನ್ನಾಗಿ ನೇಮಕ ಮಾಡಿದ್ದನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಅದರ ಬದಲಿಗೆ ಸಹಾಯಕ ಆಯುಕ್ತರು ಸೇಡಂ ಉಪ ವಿಭಾಗ ಸೇಡಂ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದರಿ ಭೂ ನ್ಯಾಯ ಮಂಡಳಿಯ ಅಧ್ಯಕ್ಷರನ್ನಾಗಿ ನೇಮಕ ಮಾಡಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಮದಿಹಳ್ಳಿ**

ಪಿ.ಆರ್. 236 ಸರ್ಕಾರದ ಉಪ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಸು.)

**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆನಾಸ 146 ಸಲಫ 2003, ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2004**

ಗ್ರಾಹಕರ ಹಿತರಕ್ಷಣಾ ಅಧಿನಿಯಮ, 1986 (ಕೇಂದ್ರ ಅಧಿನಿಯಮ 68/86) ಪ್ರಕರಣ 10 ಮತ್ತು ಕರ್ನಾಟಕ ಗ್ರಾಹಕರ ಹಿತರಕ್ಷಣಾ ನಿಯಮಗಳು, 1988ರ ನಿಯಮ 3ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ಸಿ. ರೇಣುಕಾಂಬ, ಸಂಖ್ಯೆ: 170, 3ನೇ ಮುಖ್ಯ ರಸ್ತೆ, 'ಬಿ' ಬ್ಲಾಕ್, ಉತ್ತರದ ಗೋಕುಲಂ, 3ನೇ ಹಂತ, ಮೈಸೂರು-570002, ಇವರನ್ನು ಚಾಮರಾಜನಗರ ಜಿಲ್ಲಾ ಗ್ರಾಹಕರ ವೇದಿಕೆಯ ಮಹಿಳಾ ಸದಸ್ಯರ ಸ್ಥಾನಕ್ಕೆ ಪೂರ್ಣಕಾಲದ ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್. 237 ಪೀಠಾಧಿಕಾರಿ, ಆಹಾರ-3 ಶಾಖೆ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 26 ಸಿಎನ್‌ಎಸ್ 2004, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2004**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಉಡುಪಿ ಜಿಲ್ಲಾ ಮತ್ತು ತಾಲ್ಲೂಕಿನ ಹೆರ್ಗ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿಯಮಿತ, ಪರ್ಕಳ, ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಮೇಲ್ಕಂಡ ಸಂಘದ ಆಡಳಿತ ಮಂಡಳಿಗೆ ಈಗಾಗಲೇ ಈ ಹಿಂದೆ ನಾಮನಿರ್ದೇಶನವಾಗಿದ್ದಲ್ಲಿ ಆ ನಾಮನಿರ್ದೇಶನಗಳು ಈ ಕೂಡಲೇ ರದ್ದಾಗುತ್ತವೆ.

1. ಶ್ರೀಮತಿ ಉಷಾಮೋಹನ್ ಕೋಂ ಮೋಹನ್ ವಿ. ಕುಮಾರ್
   ಬಿ.ಎಂ. ಶಾಲಾ ಬಳಿ, ಪರ್ಕಳ ಅಂಚೆ, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ
2. ಶ್ರೀ ಕೃಷ್ಣನಾಯಕ ಬಿನ್ ಲೇಟ್ ಬಡ್ಡುನಾಯಕ್, ಮಾಣಬೆಟ್ಟು ಮನೆ, ಪರ್ಕಳ ಅಂಚೆ, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ.
3. ಶ್ರೀ ಶೀನ ಪೂಜಾರಿ ಬಿನ್ ಅಂತಯ್ಯ ಪೂಜಾರಿ ತೋಟದ ಮನೆ, 80 ಬಡಗಬೆಟ್ಟು, ಪರ್ಕಳ ಅಂಚೆ, ಉಡುಪಿ ತಾಲ್ಲೂಕು, ಉಡುಪಿ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿ.ಆರ್. 238

## ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 27 ಸಿಎನ್ಎಸ್ 2003, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬೀದರ್ ಜಿಲ್ಲೆ ಭಾಲ್ಕಿ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಭಾಲ್ಕಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀ ವಿಜಯಕುಮಾರ್ ತಂದೆ ಗುರುಪ್ಪಾವಾಲೆ
2) ಶ್ರೀ ಕಾಶೀನಾಥ ಮಾಣಿಕಪ್ಪ ಮೆಟ್ರೆ
3) ಶ್ರೀಮತಿ ಶೋಭ ತಿಪ್ಪಣ್ಣ, ಭಾಲ್ಕಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿ.ಆರ್. 239

## ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 29 ಸಿಎನ್ಎಸ್ 2004, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬಾಗಲಕೋಟೆ ಜಿಲ್ಲೆ ಬೀಳಗಿ ತಾಲ್ಲೂಕಿನ ಗಲಗಲಿ ಗ್ರಾಮದ ಮೀನುಗಾರಿಕೆ ಸಹಕಾರ ಸಂಘ ನಿಯಮಿತ, ಗಲಗಲಿ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀಕಾಂತ ಕಾಶಪ್ಪ ದೊಡಮನಿ
2) ಶ್ರೀ ಮದಾರಸಾಬ್ ರಾಜೇಸಾಬ್ ಮುಧೋಳ
3) ಶ್ರೀಮತಿ ಹಟೆಲ್ಮಾ ಬುಡನಸಾಬ್ ಹುದ್ದಾರ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

ಪಿ.ಆರ್. 240

## ಅಧಿಸೂಚನೆ

**ಸಂಖ್ಯೆ: ಸಿಎಂಡಬ್ಲ್ಯೂ 30 ಸಿಎನ್ಎಸ್ 2004, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮ ನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಹಾವೇರಿ ಜಿಲ್ಲೆ ರಾಣೆಬೆನ್ನೂರು ತಾಲ್ಲೂಕಿನ ಕುರುಬರ ಉಣ್ಣೆಯ ಔದ್ಯೋಗಿಕ ಸಹಕಾರ ಸಂಘ ನಿಯಮಿತ, ರಾಣೆಬೆನ್ನೂರು, ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀ ಕರಿಯಪ್ಪ ಹೂಲಿಹಳ್ಳಿ ತಂದೆ: ನೀಲಪ್ಪ ಹೂಲಿಹಳ್ಳಿ, ರಾಣಿಬೆನ್ನೂರು

2) ಶ್ರೀ ಪುಟ್ಟಪ್ಪ ಗುಡ್ಡಪ್ಪ ಮರಿಯಮ್ಮನವರ್, ರಾಣೆಬೆನ್ನೂರು
3) ಶ್ರೀಮತಿ ಸುನಿತಾ ನೀಲಪ್ಪ ದೇವರಗುಡ್ಡ, ಮೇಡ್ಲೇರಿ, ರಾಣೆಬೆನ್ನೂರು ತಾಲ್ಲೂಕು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ಪಿ.ಆರ್. 241 ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 33 ಸಿಎಸ್ಎಸ್ 2004, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2004**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮ ನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11) ರ ಕಲಂ 29ರ ಉಪ ಕಲಂ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಕೊಪ್ಪಳ ಜಿಲ್ಲೆ ಮತ್ತು ಕೊಪ್ಪಳ ತಾಲ್ಲೂಕಿನ ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿ., ಕೊಪ್ಪಳ ಇದರ ಆಡಳಿತ ಮಂಡಳಿಗೆ ಸದಸ್ಯರುಗಳನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

1) ಶ್ರೀಮತಿ ನೀಲಮ್ಮ ಬಗನಾಳ, ಸಾ: ಬಗನಾಳ
2) ಶ್ರೀ ಅಂದಾನಪ್ಪ ಸಂಗಪ್ಪ ಬೆಣಕಲ್, ಕೊಪ್ಪಳ
3) ಶ್ರೀ ಶೇಖರಪ್ಪ ಯಮನಪ್ಪ ಲಮಾಣಿ, ಯಮಗೇರಾ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ಪಿ.ಆರ್. 242 ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 35 ಸಿಎಸ್ಎಸ್ 2004, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2004**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಪ್ರಕರಣ 29(1) ಮತ್ತು ಪ್ರಕರಣ 53ಎ ರಡಿಯಲ್ಲಿ ದತ್ತವಾಗಿರುವ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಬೀದರ್ ಸಹಕಾರ ಸಕ್ಕರೆ ಕಾರ್ಖಾನೆ ನಿ., ಹಳ್ಳಿಖೇಡ ಇದಕ್ಕೆ ಮೇಲ್ಕಂಡ ಪ್ರಕರಣಗಳಡಿಯಲ್ಲಿ ನಾಮನಿರ್ದೇಶನಗೊಂಡಿರುವ ಈ ಕೆಳಕಂಡವರುಗಳ ನಾಮನಿರ್ದೇಶನಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

1) ಶ್ರೀ ಸೈಯದ್ ಖಾಜಾಮಿಯಾ
2) ಶ್ರೀಮತಿ ಚಂದ್ರಕುಮಾರಿ ಕೆ. ದೇಶಪಾಂಡೆ
3) ಶ್ರೀ ಬಸವರಾಜಸ್ವಾಮಿ
4) ಶ್ರೀ ಅಕ್ತರ್ ರಹಮಾನ್

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ಪಿ.ಆರ್. 243 ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

**ಅಧಿಸೂಚನೆ**

**ಸಂಖ್ಯೆ: ಸಿಎಂಡಬ್ಲ್ಯೂ 114 ಸಿಎಸ್ಎಸ್ 2003, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2004**

ಸರ್ಕಾರದ ಅಧಿಸೂಚನೆ ಸಂಖ್ಯೆ ಸಮಾತೂ 230 ಸಸಕಾ 2001 ದಿನಾಂಕ: 27.9.2001 ರಲ್ಲಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಕಾಕತಿ, ಬೆಳಗಾಂ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಬಾಳಾ ಸಾಹೇಬ ಮಲಗೌಡ ಪಾಟೀಲ ಸಾ: ಬಸಾಪುರ ತಾ: ಜಿ: ಬೆಳಗಾವಿ ರವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರಿದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 29ರ ಉಪ ಕಲಂ (1)ರ ಮೇರೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಶ್ರೀ ಪ್ರಭಾಕರ ನಲವಡೆ ಇವರನ್ನು ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಕಾಕತಿ, ಬೆಳಗಾಂ, ಇದರ ಆಡಳಿತ ಮಂಡಳಿಯ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ಪಿ.ಆರ್. 244 ವಿಶೇಷ ಕರ್ತವ್ಯಾಧಿಕಾರಿ,
ಸಹಕಾರ ಇಲಾಖೆ.

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ
## ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 38 ರಾಶಾಪು 2003, ಬೆಂಗಳೂರು ದಿನಾಂಕ: 9ನೇ ಮಾರ್ಚ್ 2004**

ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1899ರ ಅಧಿಕೃತ ಕನ್ನಡ ಭಾಷಾಂತರವನ್ನು ಕರ್ನಾಟಕ ಅಫಿಷಿಯಲ್ ಲಾಂಗ್ವೇಜ್ ಆಕ್ಟ್, 1963ರ ಪ್ರಕರಣ 5ಎ ರಡಿಯಲ್ಲಿ ರಾಜ್ಯಪಾಲರ ಅಧಿಕಾರದ ಮೇರೆಗೆ ಸಾರ್ವಜನಿಕರ ಮಾಹಿತಿಗಾಗಿ ಕರ್ನಾಟಕ ರಾಜ್ಯ ಪತ್ರದಲ್ಲಿ ಮರು ಪ್ರಕಟಿಸಲು ಆದೇಶಿಸಲಾಗಿದೆ.

## ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1899
### ಪ್ರಕರಣಗಳ ಅನುಕ್ರಮಣಿಕೆ

**ಪ್ರಕರಣಗಳು:**

22. ಅಧಿನಿಯಮಿತಿಯನ್ನು ಅಂಗೀಕಾರ ಮಾಡಿದ ಮತ್ತು ಅದರ ಪ್ರಾರಂಭದ ನಡುವಣ ಅವಧಿಯಲ್ಲಿ ನಿಯಮಗಳನ್ನು ಅಥವಾ ಉಪವಿಧಿಗಳನ್ನು ರಚಿಸುವುದು ಅಥವಾ ಆದೇಶಗಳನ್ನು ಹೊರಡಿಸುವುದು
23. ಪೂರ್ವ ಪ್ರಕಟಣೆಯ ತರುವಾಯ ನಿಯಮಗಳನ್ನು ಅಥವಾ ಉಪವಿಧಿಗಳನ್ನು ರಚಿಸುವುದಕ್ಕೆ ಅನ್ವಯಿಸುವ ಉಪಬಂಧಗಳು
24. ನಿರಸನಗೊಳಿಸಲಾದ ಮತ್ತು ಪುನಃ ಅಧಿನಿಯಮಿಸಲಾದ ಅಧಿನಿಯಮಿತಿಗಳ ಮೇರೆಗೆ ಹೊರಡಿಸಲಾದ ಆದೇಶ, ಇತ್ಯಾದಿಗಳ ಮುಂದುವರಿಕೆ

ಸಂಕೀರ್ಣ

25. ಜುಲ್ಮಾನೆಗಳ ವಸೂಲಿ
26. ಎರಡು ಅಥವಾ ಅದಕ್ಕಿಂತ ಹೆಚ್ಚು ಅಧಿನಿಯಮಿತಿಗಳ ಮೇರೆಗೆ ದಂಡನೀಯವಾದ ಅಪರಾಧಗಳಿಗೆ ಸಂಬಂಧಿಸಿದ ಉಪಬಂಧ
27. ಅಂಚೆಯ ಮೂಲಕ ಜಾರಿ ಎಂಬುದರ ಅರ್ಥ
28. ಅಧಿನಿಯಮಿತಿಗಳನ್ನು ಉದಾಹರಿಸುವುದು
29. ಹಿಂದಿನ ಅಧಿನಿಯಮಿತಿಗಳ, ನಿಯಮಗಳ ಮತ್ತು ಉಪವಿಧಿಗಳ ಉಳಿಸುವಿಕೆ
30. ಆದೇಶಗಳನ್ನು ಮತ್ತು ಅಧಿಸೂಚನೆಗಳನ್ನು ರಾಜಪತ್ರದಲ್ಲಿ ಪ್ರಕಟಿಸುವುದು
31. ಸರ್ಕಾರವು ಕೆಲವು ಸ್ಥಳಗಳಿಗೆ ವಿಸ್ತರಿಸಿದ ಅಥವಾ ಅನ್ವಯಿಸಿದ ಅಧಿನಿಯಮಗಳು ಅಥವಾ ಅಧಿನಿಯಮಗಳ ಉಪಬಂಧಗಳು ಯಾವ ಕಾಲಗಳಲ್ಲಿ ಜಾರಿಗೆ ಬರತಕ್ಕದ್ದೋ ಆ ಕಾಲಗಳನ್ನು ನಿರ್ಧರಿಸುವುದು

31ಎ. ಕೆಲವು ಕಾನೂನುಗಳಿಗೆ ಮಾಡಿದ ಉಲ್ಲೇಖಗಳ ಅರ್ಥಾನ್ವಯ

32. ಅಧ್ಯಾದೇಶಗಳಿಗೆ ಅಧಿನಿಯಮದ ಅನ್ವಯ

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

**1985ರ ತಿದ್ದುಪಡಿ ಮಾಡುವ ಅಧಿನಿಯಮ 9:–** ಕಾನೂನಿನ ಉಪಬಂಧದ ನಿರಸನ ಅಥವಾ ಅಂಥ ಉಪಬಂಧದ ಲೋಪ ಅಥವಾ ಬಿಟ್ಟುಬಿಡುವಿಕೆ ಇವುಗಳ ನಡುವೆ ಮೂಲಭೂತವಾಗಿ ಯಾವುದೇ ವ್ಯತ್ಯಾಸವಿಲ್ಲದಿರುವುದರಿಂದ, ಈ ಎಲ್ಲ ವರ್ಷಗಳಲ್ಲಿ ನಿರಸನ ಅಥವಾ ಲೋಪಿಸುವುದು ಅಥವಾ ಬಿಟ್ಟುಬಿಡುವುದು ಎಂಬ ಪದಪ್ರಯೋಗವನ್ನು ಎಲ್ಲ ಕಾನೂನುಗಳಲ್ಲಿ, ಕಾನೂನಿನ ಉಪಬಂಧವನ್ನು ನಿರಸನಗೊಳಿಸಲು ಬಳಸಲಾಗುತ್ತಿತ್ತು.

ಆದಾಗ್ಯೂ, ಕರ್ನಾಟಕ ಉಚ್ಚ ನ್ಯಾಯಾಲಯವು, (1981 ರಲ್ಲಿ) 128 ಐಟಿಆರ್ 547 ರಲ್ಲಿ ವರದಿಯಾಗಿರುವ ಆರ್. ಅಬ್ದುಲ್ ಅಜೀಜ್ ವಿರುದ್ಧ ಕರ್ನಾಟಕ ಆದಾಯ ತೆರಿಗೆ ಆಯುಕ್ತರ ಮೊಕದ್ದಮೆಯಲ್ಲಿ, ನಿರಸನ ಎಂಬ ಪದಪ್ರಯೋಗವು, ಲೋಪಿಸುವುದು ಅಥವಾ ಬಿಟ್ಟುಬಿಡುವುದು ಎಂಬ ಪದಪ್ರಯೋಗಕ್ಕಿಂತ ಭಿನ್ನವಾದುದು ಎಂಬ ಅಭಿಪ್ರಾಯವನ್ನು ಇತ್ತೀಚೆಗೆ ವ್ಯಕ್ತಪಡಿಸಿದೆ. ಇದರಿಂದ ವಿಸಂಗತ ಸನ್ನಿವೇಶ ಉಂಟಾಗಿದ್ದು ಆ ಮೂಲಕ ಅನುದ್ದೇಶಿತ ಪರಿಣಾಮಗಳು ಉಂಟಾಗುವ ಸಂಭವವಿದೆ.

ಈ ವಿಸಂಗತತೆಯನ್ನು ನಿವಾರಿಸುವ ದೃಷ್ಟಿಯಿಂದ ನಿರಸನ ಎಂಬ ಪದದ ಪರಿಧಿಯೊಳಗೆ ಲೋಪಗೊಳಿಸುವುದು ಮತ್ತು ಬಿಟ್ಟುಬಿಡುವುದು ಎಂಬ ಪದಗಳನ್ನು ನಿರ್ದಿಷ್ಟವಾಗಿ ಸೇರಿಸಲು ಉದ್ದೇಶಿಸಲಾಗಿದೆ. ಇತರ ಕೆಲವು ಔಪಚಾರಿಕ ತಿದ್ದುಪಡಿಗಳನ್ನು ಮಾಡಲು ಈ ಅವಕಾಶವನ್ನು ಬಳಸಿಕೊಳ್ಳಲಾಗಿದೆ.

ಆದ್ದರಿಂದ ಈ ವಿಧೇಯಕ.

**2003ರ ತಿದ್ದುಪಡಿ ಮಾಡುವ ಅಧಿನಿಯಮ 13:–** ಕರ್ನಾಟಕ ಅಧಿನಿಯಮಗಳ ಇಂದಿನವರೆಗೆ ಇರುವಂತೆ ಸಂಹಿತೆಗಳ ಸಂಪುಟಗಳನ್ನು ಸಿದ್ಧಪಡಿಸುವುದು ಮತ್ತು ಪ್ರಯೋಜನ ಅವಧಿ ಪೂರೈಸಿರುವ ಎಲ್ಲ ಅಧಿನಿಯಮಗಳನ್ನು ಮತ್ತು ಕಾಲಕಾಲಕ್ಕೆ ತಿದ್ದುಪಡಿ ಮಾಡಲಾದ ಅಧಿನಿಯಮಗಳನ್ನು ನಿರಸನಗೊಳಿಸುವುದು ಅವಶ್ಯಕವೆಂದು ಪರಿಗಣಿಸಲಾಗಿದೆ.

ಮೇಲಿನ ಉದ್ದೇಶಕ್ಕಾಗಿ ಸರ್ಕಾರವು ಏಕ ಸದಸ್ಯ ಸಮಿತಿಯೊಂದನ್ನು ರಚಿಸಿದೆ. ಈ ಸಮಿತಿಯು, 1.11.1956 ರಿಂದ 31.12.2000ದ ವರೆಗಿನ ಕರ್ನಾಟಕ ಅಧಿನಿಯಮಗಳನ್ನು ಪರಿಶೀಲಿಸಿ, ಈ ಮುಂದಿನ ಅಧಿನಿಯಮಗಳನ್ನು ನಿರಸನಗೊಳಿಸುವುದಕ್ಕಾಗಿ "ನಿರಸನಗೊಳಿಸುವ ಮತ್ತು ತಿದ್ದುಪಡಿ ಮಾಡುವ ವಿಧೇಯಕ, 2002" ಎಂಬ ಈ ವಿಧೇಯಕವನ್ನು ಪ್ರಸ್ತಾಪಿಸಿದೆ.

X X X X

ಈ ವಿಧೇಯಕವು, ಅವಶ್ಯಕವೆಂದು ಭಾವಿಸಲಾದ ಕೆಲವು ಅಧಿನಿಯಮಗಳ ತಿದ್ದುಪಡಿಗಳನ್ನೂ ಸಹ ಒಳಗೊಂಡಿರುತ್ತದೆ.

ಆದ್ದರಿಂದ ಈ ವಿಧೇಯಕ.

(2002ರ ವಿಧಾನ ಪರಿಷತ್ತಿನ ವಿಧೇಯಕ ಸಂಖ್ಯೆ 4 ರಿಂದ ಪಡೆಯಲಾಗಿದೆ.)

* * * *

# 1899ರ [1][ಕರ್ನಾಟಕ][1] ಅಧಿನಿಯಮ ಸಂಖ್ಯೆ III

# [1][ಕರ್ನಾಟಕ][1] ಸಾಮಾನ್ಯ ಖಂಡಗಳ ಅಧಿನಿಯಮ, 1899

(1899ರ ಜುಲೈ 3ನೇ ದಿನದಂದು ಅಂಗೀಕರಿಸಲಾಗಿದೆ.)

(1930ರ XII, 1949ರ VII, 1950ರ X, 1953ರ XII, 2003ರ XIII ರ ಅಧಿನಿಯಮ, ಕಾನೂನುಗಳ ಅಳವಡಿಕೆ ಆದೇಶಗಳು. 1956, 1973 ಮತ್ತು 1985ರ 9 ಇವುಗಳ ಮೂಲಕ ತಿದ್ದುಪಡಿಯಾದಂತೆ.)

**[1][**ಮೈಸೂರು ಅಧಿನಿಯಮಗಳಲ್ಲಿ ಮತ್ತು ಕರ್ನಾಟಕ ಅಧಿನಿಯಮಗಳ**][1]**ಲ್ಲಿ ಬಳಸಲಾಗಿರುವ ಭಾಷೆಯನ್ನು ಮತ್ತಷ್ಟು ಸಂಕ್ಷಿಪ್ತಗೊಳಿಸುವುದಕ್ಕಾಗಿ ಮತ್ತು ಇತರ ಉದ್ದೇಶಗಳಿಗಾಗಿ ರಚಿಸಲಾದ ಒಂದು ಅಧಿನಿಯಮ.

[1][ಮೈಸೂರು ಅಧಿನಿಯಮಗಳಲ್ಲಿ ಮತ್ತು ಕರ್ನಾಟಕ ಅಧಿನಿಯಮಗಳ][1]ಲ್ಲಿ ಬಳಸಲಾದ ಭಾಷೆಯನ್ನು ಮತ್ತಷ್ಟು ಸಂಕ್ಷಿಪ್ತಗೊಳಿಸುವುದು ಮತ್ತು ಆ ಅಧಿನಿಯಮಿತಿಗಳಿಗೆ ಸಂಬಂಧಪಟ್ಟ ಇತರ ಕೆಲವು ಉಪಬಂಧಗಳನ್ನು ರಚಿಸುವುದು ಯುಕ್ತವಾಗಿರುವುದರಿಂದ, ಘನತೆವೆತ್ತ ರಾಜಪ್ರತಿನಿಧಿ ಮಹಾರಾಣಿಯವರು ಈ ಮುಂದಿನಂತೆ ಅಧಿನಿಯಮವನ್ನು ರಚಿಸಿದ್ದಾರೆ:-

ಪ್ರಾರಂಭಿಕ

1. ಚಿಕ್ಕ ಹೆಸರು, [2]**[**ಪ್ರಾರಂಭ ಮತ್ತು ವ್ಯಾಪ್ತಿ**][2].-** (1) [3][ಈ ಅಧಿನಿಯಮವನ್ನು [1][ಕರ್ನಾಟಕ][1] ಸಾಮಾನ್ಯ ಖಂಡಗಳ ಅಧಿನಿಯಮ, 1899 ಎಂದು ಕರೆಯತಕ್ಕದ್ದು.][3]

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

[4][2. xxx][4]

[5][3. ಇದು ಇಡೀ ಕರ್ನಾಟಕ ರಾಜ್ಯಕ್ಕೆ ಪ್ರಾಪ್ತವಾಗುತ್ತದೆ.][5]

ಸಾಮಾನ್ಯ ಪರಿಭಾಷೆಗಳು

3. ಪರಿಭಾಷೆಗಳು:- ಈ ಅಧಿನಿಯಮದಲ್ಲಿ ಮತ್ತು ಈ ಅಧಿನಿಯಮದ ಪ್ರಾರಂಭದ ತರುವಾಯ ರಚಿಸಲಾದ ಎಲ್ಲ [1][ಮೈಸೂರು ಅಧಿನಿಯಮಗಳು ಮತ್ತು ಕರ್ನಾಟಕ ಅಧಿನಿಯಮಗಳ][1]ಲ್ಲಿ ವಿಷಯ ಅಥವಾ ಸಂದರ್ಭಕ್ಕೆ ವಿರುದ್ಧವಾದುದು ಏನಾದರೂ ಇದ್ದ ಹೊರತು,-

(1) " ದುಷ್ಪ್ರೇರಿಸು" ಎಂಬುದು ಅದರ ವ್ಯಾಕರಣ ವ್ಯತ್ಯಾಸಗಳು ಮತ್ತು ಸಜಾತೀಯ ಪದಾವಳಿಗಳೊಂದಿಗೆ, ಭಾರತ ದಂಡ ಸಂಹಿತೆಯಲ್ಲಿ ಅದಕ್ಕೆ ನೀಡಲಾಗಿರುವ ಅರ್ಥವನ್ನೇ ಹೊಂದಿರತಕ್ಕದ್ದು ;

(2) "ಕೃತ್ಯ" ಎಂಬುದನ್ನು ಒಂದು ಅಪರಾಧಕ್ಕೆ ಅಥವಾ ಒಂದು ಸಿವಿಲ್ ಅಕ್ರಮಕ್ಕೆ ಸಂಬಂಧಿಸಿದಂತೆ ಬಳಸಿದಾಗ, ಅದು ಕೃತ್ಯಗಳ ಸರಣಿಯನ್ನು ಒಳಗೊಳ್ಳತಕ್ಕದ್ದು ಮತ್ತು ಮಾಡಿದ ಕೃತ್ಯಗಳನ್ನು ಹೇಳುವ ಪದಗಳು ಕಾನೂನು ಸಮ್ಮತವಲ್ಲದ ಲೋಪಗಳಿಗೂ ಸಹ ವ್ಯಾಪ್ತವಾಗತಕ್ಕದ್ದು ;

(3) " ಶಪಥ ಪತ್ರ " ಎಂಬುದು, ಪ್ರಮಾಣ ಮಾಡುವುದಕ್ಕೆ ಬದಲಾಗಿ ಪ್ರತಿಜ್ಞೆ ಮಾಡಲು ಅಥವಾ ಘೋಷಣೆ ಮಾಡಲು ಕಾನೂನು ಮೂಲಕ ಅನುಮತಿಸಲಾದ ವ್ಯಕ್ತಿಗಳ ಸಂದರ್ಭದಲ್ಲಿ ಪ್ರತಿಜ್ಞಾ ವಚನ ಮತ್ತು ಘೋಷಣೆಯನ್ನು ಒಳಗೊಳ್ಳತಕ್ಕದ್ದು;

(4) " ಬ್ಯಾರಿಸ್ಟರ್ " ಎಂಬುದಕ್ಕೆ, ಇಂಗ್ಲೆಂಡಿನ ಅಥವಾ ಐರ್ಲೆಂಡಿನ ಒಬ್ಬ ಬ್ಯಾರಿಸ್ಟರ್, ಅಥವಾ ಸ್ಕಾಟ್‌ಲ್ಯಾಂಡಿನ ನ್ಯಾಯವಾದಿಗಳ ನಿಕಾಯದ ಒಬ್ಬ ಸದಸ್ಯ ಎಂದು ಅರ್ಥವಿರತಕ್ಕದ್ದು ;

[6][(5) "ಬ್ರಿಟೀಷ್ ಭಾರತ " ಎಂಬುದಕ್ಕೆ ಭಾರತ ಸರ್ಕಾರದ ಅಧಿನಿಯಮ, 1935 ರ III ನೇ ಭಾಗವು ಪ್ರಾರಂಭವಾಗುವುದಕ್ಕೆ ಮುಂಚಿನ ಅವಧಿಗೆ ಸಂಬಂಧಿಸಿದಂತೆ ಭಾರತದ ಗೌರ್ನರ್ ಜನರಲ್ಲನ ಮೂಲಕ ಅಥವಾ ಭಾರತದ ಗೌರ್ನರ್ ಜನರಲ್ಲನಿಗೆ ಅಧೀನನಾಗಿರುವ

---

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶದ, ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
2. 2003ರ ಕರ್ನಾಟಕ ನಿರಸನಗೊಳಿಸುವ ಮತ್ತು ತಿದ್ದುಪಡಿ ಮಾಡುವ ಅಧಿನಿಯಮ, 2002 (2003ರ 13)ರ ಮೂಲಕ 1.11.1956 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.
3. 1950ರ ಅಧಿನಿಯಮ ಸಂಖ್ಯೆ X ರ ಮೂಲಕ ಪ್ರತಿಯೋಜಿಸಲಾಗಿದೆ.
4. 2ನೇ ಪ್ರಕರಣ ಮತ್ತು ಅನುಸೂಚಿಯನ್ನು 1953 ರ ಅಧಿನಿಯಮ ಸಂಖ್ಯೆ 12 ರ ಮೂಲಕ ಬಿಟ್ಟುಬಿಡಲಾಗಿದೆ.
5. 2003ರ ಕರ್ನಾಟಕ ನಿರಸನಗೊಳಿಸುವ ಮತ್ತು ತಿದ್ದುಪಡಿ ಮಾಡುವ ಅಧಿನಿಯಮ, 2002 (2003ರ 13) ರ ಮೂಲಕ 1.11.1956 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.
6. 1953ರ ಅಧಿನಿಯಮ ಸಂಖ್ಯೆ 12ರ ಮೂಲಕ ಪ್ರತಿಯೋಜಿಸಲಾಗಿದೆ.

ಯಾರೇ ಗೌರ್ನರನ ಅಥವಾ ಅಧೀನ ಅಧಿಕಾರಿಯ ಮೂಲಕ ಹಿಸ್ ಮೆಜಿಸ್ಟಿಯ ಆಳ್ವಿಕೆಗೆ ತತ್ಕಾಲದಲ್ಲಿ ಒಳಪಟ್ಟಿರುವ ಹಿಸ್ ಮೆಜೆಸ್ಟಿಯ ಆಧಿಪತ್ಯಗಳೊಳಗಿನ ಎಲ್ಲ ರಾಜ್ಯಕ್ಷೇತ್ರಗಳು ಮತ್ತು ಸ್ಥಳಗಳು ಎಂಬ ಅರ್ಥವಿರತಕ್ಕದ್ದು ಮತ್ತು ಆ ದಿನಾಂಕದ ತರುವಾಯದ ಮತ್ತು ಭಾರತದ ಅಧಿಪತ್ಯ ಸ್ಥಾಪನೆಯಾದ ದಿನಾಂಕಕ್ಕೆ ಮುಂಚಿನ ಯಾವುದೇ ಅವಧಿಗೆ ಸಂಬಂಧಿಸಿದಂತೆ ಗವರ್ನರುಗಳ ಪ್ರಾಂತ್ಯಗಳಲ್ಲಿ ಮತ್ತು ಚೀಫ್ ಕಮಿಷನರನ ಪ್ರಾಂತ್ಯಗಳಲ್ಲಿ ತತ್ಕಾಲದಲ್ಲಿ ಒಳಗೊಂಡ ಎಲ್ಲ ರಾಜ್ಯಕ್ಷೇತ್ರಗಳು ಎಂಬ ಅರ್ಥವಿರತಕ್ಕದ್ದು;][6]

[1][(5ಎ) "ಕೇಂದ್ರ ಅಧಿನಿಯಮ" ಎಂಬುದಕ್ಕೆ ಸಂಸತ್ತಿನ ಅಧಿನಿಯಮವೆಂದು ಅರ್ಥವಿರತಕ್ಕದ್ದು ಮತ್ತು ಅದು,-

(ಎ) ಸಂವಿಧಾನವು ಪ್ರಾರಂಭವಾಗುವುದಕ್ಕೆ ಮುಂಚೆ ಆಧಿಪತ್ಯದ ವಿಧಾನ ಮಂಡಲವು ಅಥವಾ ಭಾರತ ವಿಧಾನ ಮಂಡಲವು ಅಂಗೀಕರಿಸಿದ ಅಧಿನಿಯಮವನ್ನು ಒಳಗೊಳ್ಳತಕ್ಕದ್ದು, ಮತ್ತು

(ಬಿ) ಅಂಥ ಪ್ರಾರಂಭಕ್ಕೆ ಮುಂಚೆ ಪರಿಷತ್ತನ್ನೊಳಗೊಂಡ ಗವರ್ನರ್ ಜನರಲ್ ಅಥವಾ ಗೌರ್ನರ್ ಜನರಲ್ಲನು ತನ್ನ ಕಾನೂನು ರಚನಾ ಸಾಮರ್ಥ್ಯದಲ್ಲಿ ರಚಿಸಿದ ಅಧಿನಿಯಮವನ್ನು ಒಳಗೊಳ್ಳತಕ್ಕದ್ದು;

(5ಬಿ) " ಕೇಂದ್ರ ಸರ್ಕಾರ " ಎಂಬುದಕ್ಕೆ,-

(ಎ) ಸಂವಿಧಾನದ ಪ್ರಾರಂಭಕ್ಕೆ ಮುಂಚೆ ಮಾಡಲಾದ ಯಾವುದೇ ಕಾರ್ಯದ ಸಂಬಂಧದಲ್ಲಿ ಗೌರ್ನರ್ ಜನರಲ್ ಅಥವಾ ಸಂದರ್ಭಾನುಸಾರ ಪರಿಷತ್ತನ್ನೊಳಗೊಂಡ ಗೌರ್ನರ್ ಜನರಲ್ ಎಂದು ಅರ್ಥವಿರತಕ್ಕದ್ದು; ಮತ್ತು ಅದು, (i) ಭಾರತ ಸರ್ಕಾರದ ಅಧಿನಿಯಮ, 1935ರ 124ನೇ ಪ್ರಕರಣದ (1)ನೇ ಉಪ ಪ್ರಕರಣದ ಅಡಿಯಲ್ಲಿ ಒಂದು ಪ್ರಾಂತೀಯ ಸರ್ಕಾರಕ್ಕೆ ವಹಿಸಲಾದ ಪ್ರಕಾರ್ಯಗಳಿಗೆ ಸಂಬಂಧಪಟ್ಟಂತೆ, ಆ ಉಪಪ್ರಕರಣದ ಅಡಿಯಲ್ಲಿ ಪ್ರಾಂತೀಯ ಸರ್ಕಾರಕ್ಕೆ ನೀಡಲಾದ ಅಧಿಕಾರ ವ್ಯಾಪ್ತಿಯೊಳಗೆ ಕಾರ್ಯ ನಿರ್ವಹಿಸುವ ಪ್ರಾಂತೀಯ ಸರ್ಕಾರವನ್ನು ಒಳಗೊಳ್ಳತಕ್ಕದ್ದು; ಮತ್ತು (ii) ಮುಖ್ಯ ಆಯುಕ್ತರ ಪ್ರಾಂತ್ಯದ ಆಡಳಿತಕ್ಕೆ ಸಂಬಂಧಪಟ್ಟಂತೆ, ಸದರಿ ಅಧಿನಿಯಮದ 94ನೇ ಪ್ರಕರಣದ (3)ನೇ ಉಪಪ್ರಕರಣದ ಅಡಿಯಲ್ಲಿ ಮುಖ್ಯ ಆಯುಕ್ತರಿಗೆ ನೀಡಲಾದ ಅಧಿಕಾರ ವ್ಯಾಪ್ತಿಯೊಳಗೆ ಕಾರ್ಯನಿರ್ವಹಿಸುವ ಮುಖ್ಯ ಆಯುಕ್ತರನ್ನು ಒಳಗೊಳ್ಳತಕ್ಕದ್ದು; ಮತ್ತು

(ಬಿ) ಸಂವಿಧಾನವು ಪ್ರಾರಂಭವಾದ ತರುವಾಯ ಮಾಡಲಾದ ಅಥವಾ ಮಾಡಬೇಕಾದ ಯಾವುದೇ ಕಾರ್ಯದ ಸಂಬಂಧದಲ್ಲಿ ರಾಷ್ಟ್ರಪತಿ ಎಂಬ ಅರ್ಥವಿರತಕ್ಕದ್ದು; ಮತ್ತು ಅದು, (i) ರಾಜ್ಯ ಸರ್ಕಾರಕ್ಕೆ ಸಂವಿಧಾನದ 258 ನೇ ಅನುಚ್ಛೇದದ (1) ನೇ ಖಂಡದ ಅಡಿಯಲ್ಲಿ ವಹಿಸಲಾದ ಪ್ರಕಾರ್ಯಗಳ ಸಂಬಂಧದಲ್ಲಿ ಆ ಖಂಡದ ಅಡಿಯಲ್ಲಿ ಆ ರಾಜ್ಯ ಸರ್ಕಾರಕ್ಕೆ ನೀಡಲಾದ ಅಧಿಕಾರ ವ್ಯಾಪ್ತಿಯೊಳಗೆ ಕಾರ್ಯ ನಿರ್ವಹಿಸುತ್ತಿರುವ ರಾಜ್ಯ ಸರ್ಕಾರವನ್ನು ಒಳಗೊಳ್ಳತಕ್ಕದ್ದು ; [2][(ii) ಸಂವಿಧಾನದ (ಏಳನೇ ತಿದ್ದುಪಡಿ) ಅಧಿನಿಯಮ, 1956ರ ಪ್ರಾರಂಭಕ್ಕೆ ಮುಂಚೆ ' ಸಿ ' ಭಾಗದ ರಾಜ್ಯದ ಆಡಳಿತಕ್ಕೆ ಸಂಬಂಧಪಟ್ಟಂತೆ,][2] ಮುಖ್ಯ ಆಯುಕ್ತ ಅಥವಾ ಲೆಫ್ಟಿನೆಂಟ್ ಗವರ್ನರ್ ಅಥವಾ ನೆರೆರಾಜ್ಯದ ಸರ್ಕಾರ ಅಥವಾ ಸಂವಿಧಾನದ 239ನೆಯ ಅನುಚ್ಛೇದ ಅಥವಾ ಸಂದರ್ಭಾನುಸಾರ 243ನೇ ಅನುಚ್ಛೇದದ ಅಡಿಯಲ್ಲಿ ಅವನಿಗೆ ಅಥವಾ ಅದಕ್ಕೆ ಕೊಡಲಾದ ಅಧಿಕಾರದ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಇತರ ಪ್ರಾಧಿಕಾರ [2][ಮತ್ತು (iii) ಒಕ್ಕೂಟ ರಾಜ್ಯಕ್ಷೇತ್ರದ ಆಡಳಿತಕ್ಕೆ ಸಂಬಂಧಪಟ್ಟಂತೆ, ಸಂವಿಧಾನದ 239ನೇ ಅನುಚ್ಛೇದದ ಅಡಿಯಲ್ಲಿ ಅವನಿಗೆ ಕೊಡಲಾದ ಅಧಿಕಾರ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅದರ ಆಡಳಿತಗಾರ][2] - ಇವರನ್ನು ಒಳಗೊಳ್ಳತಕ್ಕದ್ದು;][1]

(6) " ಅಧ್ಯಾಯ" ಎಂದರೆ, ಆ ಪದವು ಯಾವ ಅಧಿನಿಯಮದಲ್ಲಿ ಬರುವುದೋ ಅದರ ಅಧ್ಯಾಯ;

[3][(7) " ಮುಖ್ಯ ರೆವಿನ್ಯೂ ನಿಯಂತ್ರಣ ಪ್ರಾಧಿಕಾರ " ಅಥವಾ " ಮುಖ್ಯ ರೆವಿನ್ಯೂ ಪ್ರಾಧಿಕಾರ" ಎಂಬುದಕ್ಕೆ ರಾಜ್ಯ ಸರ್ಕಾರವು ರಾಜಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ಪ್ರಾಧಿಕಾರ ಎಂಬ ಅರ್ಥವಿರತಕ್ಕದ್ದು;][3]

[1][(7ಎ) "ಬೆಂಗಳೂರು ನಗರ" ಎಂಬುದಕ್ಕೆ ಬೆಂಗಳೂರು ನಗರದ ಪುರಸಭಾ ವ್ಯವಹಾರಗಳಿಗೆ ಸಂಬಂಧಪಟ್ಟಂತೆ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಅಧಿನಿಯಮದ ಅಡಿಯಲ್ಲಿ ಬೆಂಗಳೂರು ನಗರವೆಂದು ಆಗಿಂದಾಗ್ಗೆ ಘೋಷಿತವಾಗಿರುವಂಥ ಸ್ಥಳೀಯ ಪ್ರದೇಶ ಎಂಬ ಅರ್ಥವಿರತಕ್ಕದ್ದು;][1]

(8) "ಪ್ರಾರಂಭ" ಎಂಬ ಪದವನ್ನು ಒಂದು ಅಧಿನಿಯಮಕ್ಕೆ ಸಂಬಂಧಪಟ್ಟಂತೆ ಬಳಸಿದಾಗ ಆ ಅಧಿನಿಯಮವು ಜಾರಿಗೆ ಬರುವಂಥ ದಿನಾಂಕ ಎಂಬ ಅರ್ಥವಿರತಕ್ಕದ್ದು;

[1][(8ಎ) " ಸಂವಿಧಾನ " ಎಂದರೆ ಭಾರತದ ಸಂವಿಧಾನ ಎಂದು ಅರ್ಥವಾಗತಕ್ಕದ್ದು;

1. 1953ರ ಅಧಿನಿಯಮ ಸಂಖ್ಯೆ 12 ರ ಮೂಲಕ ಸೇರಿಸಲಾಗಿದೆ.
2. 1956ರ ಮೈಸೂರು ಕಾನೂನುಗಳ ಅಳವಡಿಕೆ ಆದೇಶದ ಮೂಲಕ 1.11.1956 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
3. 1953 ರ ಅಧಿನಿಯಮ ಸಂಖ್ಯೆ 12 ರ ಮೂಲಕ ಪ್ರತಿಯೋಜಿಸಲಾಗಿದೆ.

(8ಬಿ) "ಕಾನ್ಸುಲರ್ ಅಧಿಕಾರಿ " ಎಂಬುದು ಕಾನ್ಸುಲ್ ಜನರಲ್, ಕಾನ್ಸುಲ್, ಉಪಕಾನ್ಸುಲ್, ಕಾನ್ಸುಲರ್ ಏಜೆಂಟ್, ಪ್ರೋ ಕಾನ್ಸುಲ್ ಮತ್ತು ತತ್ಕಾಲದಲ್ಲಿ ಕಾನ್ಸುಲ್ ಜನರಲ್ಲನ, ಕಾನ್ಸುಲ್‌ನ, ವೈಸ್ ಕಾನ್ಸುಲ್‌ನ ಅಥವಾ ಕಾನ್ಸುಲರ್ ಏಜೆಂಟನ ಕರ್ತವ್ಯಗಳನ್ನು ನೆರವೇರಿಸಲು ಅಧಿಕಾರ ಪಡೆದಿರುವ ಯಾರೇ ವ್ಯಕ್ತಿಯನ್ನು ಒಳಗೊಳ್ಳತಕ್ಕದ್ದು;][1]

(9) "ಜಿಲ್ಲಾಧಿಕಾರಿ" ಎಂಬುದಕ್ಕೆ ಒಂದು ಜಿಲ್ಲೆಯ ರೆವಿನ್ಯೂ ಆಡಳಿತದ ಪ್ರಭಾರದಲ್ಲಿರುವ ಮುಖ್ಯ ಅಧಿಕಾರಿ ಎಂಬ ಅರ್ಥವಿರತಕ್ಕದ್ದು;

(10) "ಜಿಲ್ಲಾ ನ್ಯಾಯಾಧೀಶ" ಎಂಬುದಕ್ಕೆ ಮೂಲ ಅಧಿಕಾರ ವ್ಯಾಪ್ತಿಯುಳ್ಳ ಪ್ರಧಾನ ಸಿವಿಲ್ ನ್ಯಾಯಾಲಯದ ನ್ಯಾಯಾಧೀಶ ಎಂಬ ಅರ್ಥವಿರತಕ್ಕದ್ದು; [1][ಆದರೆ ಮೂಲ ಸಿವಿಲ್ ಕ್ಷೇತ್ರಾಧಿಕಾರವನ್ನು ಚಲಾಯಿಸುವಲ್ಲಿ ಉಚ್ಚ ನ್ಯಾಯಾಲಯವು ಇದರಲ್ಲಿ ಒಳಗೊಳ್ಳತಕ್ಕದ್ದಲ್ಲ;][1]

[2][(10ಎ) " ವಿಭಾಗಾಧಿಕಾರಿ" ಎಂಬುದಕ್ಕೆ [3][ಕರ್ನಾಟಕ ಭೂ ಕಂದಾಯ ಅಧಿನಿಯಮ, 1964][3] ರ ಅಡಿಯಲ್ಲಿ ನೇಮಕಗೊಂಡ ಒಂದು ವಿಭಾಗದ ವಿಭಾಗೀಯ ಕಮಿಷನರ್ ಎಂದು ಅರ್ಥವಾಗತಕ್ಕದ್ದು; ][2]

(11) "ದಸ್ತಾವೇಜು" ಎಂಬುದು ಅಕ್ಷರಗಳು, ಅಂಕಿಗಳು ಅಥವಾ ಗುರುತುಗಳ ಮೂಲಕ ಅಥವಾ ಅವುಗಳಲ್ಲಿ ಒಂದಕ್ಕಿಂತ ಹೆಚ್ಚಿನವುಗಳನ್ನು ಉಪಯೋಗಿಸುವ ಮೂಲಕ ಯಾವ ವಿಷಯವನ್ನು ಅಭಿಲೇಖಿಸುವುದಕ್ಕಾಗಿ ಉಪಯೋಗಿಸಬೇಕೆಂದು ಉದ್ದೇಶಿಸಲಾಗಿದೆಯೋ ಅಥವಾ ಹಾಗೆ ಉಪಯೋಗಿಸಬಹುದಾಗಿದೆಯೋ ಆ ಯಾವುದೇ ವಸ್ತುವಿನ ಮೇಲೆ ಬರೆಯಲಾದ, ವ್ಯಕ್ತಗೊಳಿಸಲಾದ ಅಥವಾ ವಿವರಿಸಲಾದ ಯಾವುದೇ ವಿಷಯವನ್ನು ಒಳಗೊಳ್ಳತಕ್ಕದ್ದು;

(12) " ಅಧಿನಿಯಮಿತಿ" ಎಂಬುದು ಈ ಮುಂದಿನವುಗಳನ್ನು ಒಳಗೊಳ್ಳತಕ್ಕದ್ದು,-

(ಎ) [4][ಮೈಸೂರು ಅಧಿನಿಯಮ;][4]

[3][(ಎ1) ಕರ್ನಾಟಕ ಅಧಿನಿಯಮ;][3]

(ಬಿ) [3][ಮೈಸೂರು ಪ್ರದೇಶ][3] ದಲ್ಲಿ ಕಾನೂನಾಗಿ ಜಾರಿಗೊಳಿಸಿದ, ಪರಿಷತ್ತಿನಲ್ಲಿರುವ ಭಾರತದ ಗೌರ್‍ನರ್ ಜನರಲ್ ಅಥವಾ ಭಾರತದ ಸ್ಥಳೀಯ ವಿಧಾನ ಮಂಡಲದ ಒಂದು ಅಧಿನಿಯಮ;

(ಸಿ) [3][ಮೈಸೂರು ಪ್ರದೇಶ][3] ದಲ್ಲಿ ಕಾನೂನಾಗಿ ನಿಯಮಿಸಲಾಗಿರುವ (ಯಾವುದೇ ಕಾನೂನಿನ ಮೂಲಕ ಅಥವಾ ಮೇಲೆ ಹೇಳಲಾದಂಥ ಯಾವುದೇ ಅಧಿನಿಯಮದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಚಿಸಿದ ನಿಯಮಗಳನ್ನು ಹೊರತುಪಡಿಸಿ) ನಿಯಮಗಳ ಒಂದು ಸಮುದಾಯ ; ಮತ್ತು

[2][(ಸಿ1) ಮುಂಬಯಿ ಸಾಮಾನ್ಯ ಖಂಡಗಳ ಅಧಿನಿಯಮ, 1904 (1904ರ ಮುಂಬಯಿ ಅಧಿನಿಯಮ 1) ರ 3 ನೇ ಪ್ರಕರಣದ (5) ನೇ ಖಂಡದಲ್ಲಿ ಪರಿಭಾಷಿಸಲಾದಂಥ ಒಂದು ಮುಂಬಯಿ ಅಧಿನಿಯಮ;

(ಸಿ2) ಕೊಡಗು ಜಿಲ್ಲೆಯಲ್ಲಿ ಜಾರಿಯಲ್ಲಿರುವಂಥ ಕೊಡಗು ಅಧಿನಿಯಮ ಅಥವಾ ವಿನಿಯಮ;

(ಸಿ3) ಹೈದರಾಬಾದ್ ಸಾಮಾನ್ಯ ಖಂಡಗಳ ಅಧಿನಿಯಮ, 1308 ಫಸಲಿಯ (1308 ಫಸಲಿಯ ಹೈದರಾಬಾದ್ ಅಧಿನಿಯಮ III) 2 ನೇ ಪ್ರಕರಣದ (1ಎ) ಖಂಡದಲ್ಲಿ ಪರಿಭಾಷಿಸಲಾದ ಹೈದರಾಬಾದ್ ಕಾನೂನು;

(ಸಿ4) ಮದರಾಸು ಸಾಮಾನ್ಯ ಖಂಡಗಳ ಅಧಿನಿಯಮ, 1891 (1891 ರ ಮದರಾಸು ಅಧಿನಿಯಮ 1) ರ 3 ನೇ ಪ್ರಕರಣದ (17ಎ) ಖಂಡದಲ್ಲಿ ಪರಿಭಾಷಿಸಲಾದ ಮದರಾಸು ಅಧಿನಿಯಮ; ಮತ್ತು][2]

(ಡಿ) [4][ಯಾವುದೇ [3][ಮೈಸೂರು ಅಧಿನಿಯಮ ಅಥವಾ ಕರ್ನಾಟಕ ಅಧಿನಿಯಮ][3]][4] ದಲ್ಲಿ ಅಥವಾ ಹಿಂದೆ ಹೇಳಿದಂಥ ಯಾವುದೇ ಅಧಿನಿಯಮ ಅಥವಾ ನಿಯಮಗಳ ಸಮುದಾಯದಲ್ಲಿ [2][ಅಥವಾ ಯಾವುದೇ ಮುಂಬಯಿ ಅಧಿನಿಯಮ, ಕೊಡಗು ಅಧಿನಿಯಮ, ಹೈದರಾಬಾದ್ ಕಾನೂನು ಅಥವಾ ಮದರಾಸು ಅಧಿನಿಯಮ][2] ದಲ್ಲಿ ಒಳಗೊಂಡಿರುವ ಯಾವುದೇ ಉಪಬಂಧವನ್ನೂ ಇದು ಒಳಗೊಳ್ಳತಕ್ಕದ್ದು;

1. 1953 ರ ಅಧಿನಿಯಮ ಸಂಖ್ಯೆ 12 ರ ಮೂಲಕ ಸೇರಿಸಲಾಗಿದೆ.
2. 1956ರ ಮೈಸೂರು ಕಾನೂನುಗಳ ಅಳವಡಿಕೆ ಆದೇಶದ ಮೂಲಕ 1.11.1956 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
3. 1973ರ ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.
4. 1953ರ ಅಧಿನಿಯಮ ಸಂಖ್ಯೆ 12 ರ ಮೂಲಕ ಪ್ರತಿಯೋಜಿಸಲಾಗಿದೆ.

(13) " ತಂದೆ " ಎಂಬುದು ಯಾವ ವ್ಯಕ್ತಿಯ ವೈಯಕ್ತಿಕ ಕಾನೂನು ದತ್ತು ಸ್ವೀಕಾರಕ್ಕೆ ಅನುಮತಿಸುವುದೋ ಆ ಯಾರೇ ವ್ಯಕ್ತಿಯ ಸಂದರ್ಭದಲ್ಲಿ ದತ್ತಕ ತಂದೆಯನ್ನು ಒಳಗೊಳ್ಳತಕ್ಕದ್ದು;

[1][(13ಎ) " ಹಣಕಾಸು ವರ್ಷ" ಅಥವಾ " ಅಧಿಕೃತ ವರ್ಷ" ಎಂಬುದಕ್ಕೆ ಏಪ್ರಿಲ್ ಮೊದಲನೇ ದಿನದಂದು ಪ್ರಾರಂಭವಾಗುವ ವರ್ಷ ಎಂದು ಅರ್ಥವಿರತಕ್ಕದ್ದು:

ಪರಂತು, 1949-50ನೇ ಸಾಲಿನ ಹಣಕಾಸು ಅಥವಾ ಸರ್ಕಾರಿ ವರ್ಷಕ್ಕೆ ಸಂಬಂಧಪಟ್ಟಂತೆ " ಹಣಕಾಸು ವರ್ಷ" ಅಥವಾ "ಅಧಿಕೃತ ವರ್ಷ" ಎಂದರೆ, 1949ರ ಜುಲೈ ಮೊದಲನೇ ದಿನದಂದು ಪ್ರಾರಂಭವಾಗುವ ಮತ್ತು 1950ರ ಮಾರ್ಚ್ ಮೂವತ್ತೊಂದನೇ ದಿನದಂದು ಕೊನೆಗೊಳ್ಳುವ ಅವಧಿ;][1]

(14) [2][ಕಂದಾಯ ವರ್ಷ][2] ಎಂಬುದಕ್ಕೆ ಜುಲೈ ಮೊದಲನೇ ದಿನದಂದು ಪ್ರಾರಂಭವಾಗುವ ವರ್ಷ ಎಂದು ಅರ್ಥವಿರತಕ್ಕದ್ದು;

(15) ಒಂದು ಕಾರ್ಯವನ್ನು ನಿಜವಾಗಿಯೂ ಪ್ರಾಮಾಣಿಕವಾಗಿ ಮಾಡಿದ್ದರೆ, ಅದನ್ನು ನಿರ್ಲಕ್ಷ್ಯದಿಂದ ಮಾಡಿರಲಿ ಅಥವಾ ಇಲ್ಲದಿರಲಿ, ಆ ಕಾರ್ಯವನ್ನು " ಸದ್ಭಾವನೆಯಿಂದ" ಮಾಡಲಾಗಿದೆಯೆಂದು ಭಾವಿಸತಕ್ಕದ್ದು;

[3][(16) "ಸರ್ಕಾರ" ಅಥವಾ "ಆ ಸರ್ಕಾರ" ಎಂಬುದಕ್ಕೆ,-

(ಎ) ಸಂವಿಧಾನದ ಪ್ರಾರಂಭಕ್ಕೆ ಮುಂಚೆ ಮಾಡಲಾದ ಯಾವುದೇ ಕಾರ್ಯದ ಸಂಬಂಧದಲ್ಲಿ ಮೈಸೂರಿನ ಕಾರ್ಯನಿರ್ವಾಹಕ ಸರ್ಕಾರವನ್ನು ನಡೆಸಲು ಸಂಬಂಧಪಟ್ಟ ದಿನಾಂಕದಲ್ಲಿ ಅಧಿಕಾರ ಪಡೆದಿದ್ದ ಪ್ರಾಧಿಕಾರ ಅಥವಾ ವ್ಯಕ್ತಿ ಎಂಬ ಅರ್ಥವಿರತಕ್ಕದ್ದು;

(ಬಿ) ಸಂವಿಧಾನವು ಪ್ರಾರಂಭವಾದ ತರುವಾಯ ಮಾಡಲಾದ ಅಥವಾ ಮಾಡಬೇಕಾದ ಯಾವುದೇ ಕಾರ್ಯದ ಸಂಬಂಧದಲ್ಲಿ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ ಇವೆರಡನ್ನೂ ಒಳಗೊಳ್ಳತಕ್ಕದ್ದು;][3]

[4][(16ಎ) " ಸರ್ಕಾರಿ ಭದ್ರತೆಗಳು" ಎಂಬುದಕ್ಕೆ ಕೇಂದ್ರ ಸರ್ಕಾರದ ಅಥವಾ ಯಾವುದೇ ರಾಜ್ಯ ಸರ್ಕಾರದ ಭದ್ರತೆಗಳು ಎಂದು ಅರ್ಥವಿರತಕ್ಕದ್ದು. ಆದರೆ ಸಂವಿಧಾನದ ಪ್ರಾರಂಭಕ್ಕೆ ಮುಂಚೆ ಮಾಡಲಾದ ಯಾವುದೇ ಮೈಸೂರು ಅಧಿನಿಯಮದಲ್ಲಿ ಮೈಸೂರು ರಾಜ್ಯವನ್ನು ಬಿಟ್ಟು ಯಾವುದೇ ರಾಜ್ಯ ಸರ್ಕಾರದ ಭದ್ರತೆಗಳನ್ನು ಇದು ಒಳಗೊಳ್ಳತಕ್ಕದ್ದಲ್ಲ;

(16ಬಿ) "ಉಚ್ಚ ನ್ಯಾಯಾಲಯ" ಎಂಬುದನ್ನು ಸಿವಿಲ್ ವ್ಯವಹರಣೆಗಳಿಗೆ ಸಂಬಂಧಿಸಿದಂತೆ ಅದನ್ನು ಬಳಸಿದಾಗ, [5][ಕರ್ನಾಟಕ ರಾಜ್ಯ][5] ದಲ್ಲಿನ (ಸರ್ವೋಚ್ಚ ನ್ಯಾಯಾಲಯವನ್ನು ಒಳಗೊಳ್ಳದ) ಅತ್ಯುಚ್ಚ ಸಿವಿಲ್ ಅಪೀಲು ನ್ಯಾಯಾಲಯ ಎಂಬ ಅರ್ಥವಿರತಕ್ಕದ್ದು;][4]

(17) "ಸ್ಥಿರ ಸ್ವತ್ತು" ಎಂಬುದು ಭೂಮಿ, ಭೂಮಿಯಿಂದ ದೊರಕುವ ಪ್ರಯೋಜನಗಳು, ಮತ್ತು ಭೂಮಿಗೆ ಹೊಂದಿಕೊಂಡಿರುವ ವಸ್ತುಗಳು ಅಥವಾ ಭೂಮಿಗೆ ಹೊಂದಿಕೊಂಡಿರುವ ಯಾವುದೇ ವಸ್ತುವಿನೊಂದಿಗೆ ಖಾಯಂ ಆಗಿ ಸೇರಿಕೊಂಡಿರುವ ವಸ್ತುಗಳು - ಇವುಗಳನ್ನು ಒಳಗೊಳ್ಳತಕ್ಕದ್ದು ;

(18) "ಕಾರಾವಾಸ" ಎಂಬುದಕ್ಕೆ ಭಾರತ ದಂಡ ಸಂಹಿತೆಯಲ್ಲಿ ಪರಿಭಾಷಿಸಿರುವಂತೆ ಎರಡರಲ್ಲೊಂದು ಬಗೆಯ ಕಾರಾವಾಸ ಎಂಬ ಅರ್ಥವಿರತಕ್ಕದ್ದು;

[4][(18ಎ) " ಭಾರತ " ಎಂಬುದಕ್ಕೆ ಈ ಕೆಳಕಂಡ ಅರ್ಥವಿರತಕ್ಕದ್ದು,-

(ಎ) ಭಾರತದ ಆಧಿಪತ್ಯವು ಸ್ಥಾಪನೆಯಾಗುವುದಕ್ಕೆ ಮುಂಚಿನ ಯಾವುದೇ ಅವಧಿಗೆ ಸಂಬಂಧಿಸಿದಂತೆ, ಅದು ಹಿಸ್ ಮೆಜೆಸ್ಟಿಯ ಪ್ರಭುತ್ವಕ್ಕೊಳಪಟ್ಟಿದ್ದ ದೇಶೀಯ ಅರಸರುಗಳ ಎಲ್ಲ ರಾಜ್ಯಕ್ಷೇತ್ರಗಳನ್ನು ಒಳಗೊಂಡ ಬ್ರಿಟೀಷ್ ಭಾರತ, ಅಂಥ ದೇಶೀಯ ಅರಸರ ಪ್ರಭುತ್ವಕ್ಕೊಳಪಟ್ಟ ಎಲ್ಲ ರಾಜ್ಯ ಕ್ಷೇತ್ರಗಳು ಮತ್ತು ಬುಡಕಟ್ಟು ಪ್ರದೇಶಗಳು;

(ಬಿ) ಭಾರತದ ಆಧಿಪತ್ಯವು ಸ್ಥಾಪನೆಯಾದ ತರುವಾಯ ಮತ್ತು ಸಂವಿಧಾನದ ಪ್ರಾರಂಭಕ್ಕೆ ಮುಂಚಿನ ಯಾವುದೇ ಅವಧಿಗೆ ಸಂಬಂಧಿಸಿದಂತೆ ತತ್ಕಾಲದಲ್ಲಿ ಆ ಆಧಿಪತ್ಯದಲ್ಲಿ ಸೇರಿರುವ ಎಲ್ಲ ರಾಜ್ಯಕ್ಷೇತ್ರಗಳು; ಮತ್ತು

1. 1950ರ ಅಧಿನಿಯಮ ಸಂಖ್ಯೆ X ರ ಮೂಲಕ ಸೇರಿಸಲಾಗಿದೆ.
2. 1950ರ ಅಧಿನಿಯಮ ಸಂಖ್ಯೆ X ರ ಮೂಲಕ " ರೆವಿನ್ಯೂ ವರ್ಷ " ಎಂಬ ಪದಗಳನ್ನು ಕೆಲವು ಪದಗಳಿಗೆ ಬದಲಾಗಿ ಪ್ರತಿಯೋಜಿಸಲಾಗಿದೆ.
3. 1953ರ ಅಧಿನಿಯಮ ಸಂಖ್ಯೆ 12 ರ ಮೂಲಕ ಪ್ರತಿಯೋಜಿಸಲಾಗಿದೆ.
4. 1953ರ ಅಧಿನಿಯಮ ಸಂಖ್ಯೆ 12ರ ಮೂಲಕ ಸೇರಿಸಲಾಗಿದೆ.
5. 1973ರ ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

(ಸಿ) ಭಾರತ ಸಂವಿಧಾನವು ಪ್ರಾರಂಭವಾದ ತರುವಾಯದ ಯಾವುದೇ ಅವಧಿಗೆ ಸಂಬಂಧಿಸಿದಂತೆ, ಭಾರತದ ರಾಜ್ಯ ಕ್ಷೇತ್ರದೊಳಗೆ ತತ್ಕಾಲದಲ್ಲಿ ಅಡಕವಾಗಿರುವ ಎಲ್ಲ ರಾಜ್ಯಕ್ಷೇತ್ರಗಳು.][4]

(19) " ನ್ಯಾಯಿಕ ವ್ಯವಹರಣೆ " ಎಂಬುದಕ್ಕೆ ಸಾಕ್ಷ್ಯವನ್ನು ಕಾನೂನು ಸಮ್ಮತವಾಗಿ ತೆಗೆದುಕೊಳ್ಳಲಾಗಿರುವ ಅಥವಾ ತೆಗೆದುಕೊಳ್ಳಬಹುದಾಗಿರುವ ಯಾವುದೇ ವ್ಯವಹರಣೆ ಎಂಬ ಅರ್ಥವಿರತಕ್ಕದ್ದು;

[1][(19ಎ) " ಕರ್ನಾಟಕ ಅಧಿನಿಯಮ" ಎಂಬುದಕ್ಕೆ 1973ರ ನವೆಂಬರ್ 1 ರ ತರುವಾಯ ಸಂವಿಧಾನದ ಅಡಿಯಲ್ಲಿ ಅಂಗೀಕರಿಸಲಾದ ಕರ್ನಾಟಕ ರಾಜ್ಯ ವಿಧಾನಮಂಡಲದ ಒಂದು ಅಧಿನಿಯಮ ಎಂಬ ಅರ್ಥವಿರತಕ್ಕದ್ದು ಮತ್ತು ಅದು ಈ ಕೆಳಕಂಡವುಗಳನ್ನು ಒಳಗೊಳ್ಳತಕ್ಕದ್ದು,

(i) 1956ರ ನವೆಂಬರ್ 1ರ ತರುವಾಯ ಸಂವಿಧಾನದ ಅಡಿಯಲ್ಲಿ ಅಂಗೀಕರಿಸಲಾದ ಮೈಸೂರು ರಾಜ್ಯ ವಿಧಾನ ಮಂಡಲದ ಒಂದು ಅಧಿನಿಯಮ ;

(ii) ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1899 (1899ರ ಕರ್ನಾಟಕ ಅಧಿನಿಯಮ III) ;

(iii) ಕರ್ನಾಟಕ ಉಚ್ಚ ನ್ಯಾಯಾಲಯ ಅಧಿನಿಯಮ, 1884 (1884ರ ಕರ್ನಾಟಕ ಅಧಿನಿಯಮ 1);

(19ಬಿ) " ಕರ್ನಾಟಕ" ಎಂಬುದಕ್ಕೆ ಕರ್ನಾಟಕ ರಾಜ್ಯದಲ್ಲಿ ತತ್ಕಾಲದಲ್ಲಿ ಅಡಕವಾಗಿರುವ ಎಲ್ಲ ಪ್ರದೇಶಗಳು ಎಂಬ ಅರ್ಥವಿರತಕ್ಕದ್ದು;][1]

(20) "ಸ್ಥಳೀಯ ಪ್ರಾಧಿಕಾರ" ಎಂಬುದಕ್ಕೆ ಪೌರ ಅಥವಾ ಸ್ಥಳೀಯ ನಿಧಿಯ ನಿಯಂತ್ರಣ ಅಥವಾ ನಿರ್ವಹಣೆಗೆ ಕಾನೂನು ಸಮ್ಮತವಾಗಿ ಹಕ್ಕುಳ್ಳ ಅಥವಾ ಸರ್ಕಾರವು ನಿಯಂತ್ರಣ ಅಥವಾ ನಿರ್ವಹಣೆಯನ್ನು ವಹಿಸಿಕೊಟ್ಟ ಒಂದು ಪೌರ ಸಮಿತಿ, ಜಿಲ್ಲಾ ಮಂಡಲಿ, [2][ಬಂದರು ಕಮಿಷನರರ ನಿಕಾಯ][2] ಅಥವಾ ಇತರ ಪ್ರಾಧಿಕಾರ ಎಂಬ ಅರ್ಥವಿರತಕ್ಕದ್ದು;

(21) " ಮ್ಯಾಜಿಸ್ಟ್ರೇಟ್ " ಎಂಬುದು ತತ್ಕಾಲದಲ್ಲಿ ಜಾರಿಯಲ್ಲಿರುವ ದಂಡ ಪ್ರಕ್ರಿಯಾ ಸಂಹಿತೆಯ ಅಡಿಯಲ್ಲಿ ಮ್ಯಾಜಿಸ್ಟ್ರೇಟನ ಎಲ್ಲ ಅಧಿಕಾರಗಳನ್ನು ಅಥವಾ ಅವುಗಳ ಪೈಕಿ ಯಾವುದೇ ಅಧಿಕಾರವನ್ನು ಚಲಾಯಿಸುವ ಪ್ರತಿಯೊಬ್ಬ ವ್ಯಕ್ತಿಯನ್ನು ಒಳಗೊಳ್ಳತಕ್ಕದ್ದು;

(22) "ತಿಂಗಳು" ಎಂಬುದಕ್ಕೆ ಬ್ರಿಟಿಷ್ ಕ್ಯಾಲೆಂಡರಿಗೆ ಅನುಸಾರವಾಗಿ ಲೆಕ್ಕ ಹಾಕಲಾದ ತಿಂಗಳು ಎಂಬ ಅರ್ಥವಿರತಕ್ಕದ್ದು;

(23) "ಚರ ಸ್ವತ್ತು" ಎಂಬುದಕ್ಕೆ ಸ್ಥಿರಸ್ವತ್ತನ್ನು ಬಿಟ್ಟು ಉಳಿದ ಎಲ್ಲ ಬಗೆಯ ಸ್ವತ್ತು ಎಂಬ ಅರ್ಥವಿರತಕ್ಕದ್ದು;

(24) "ಮೈಸೂರು" ಎಂಬುದಕ್ಕೆ [3][[1][1973ರ ನವೆಂಬರ್ 1ನೇ ದಿನಕ್ಕೆ ಮುಂಚೆ ಮೈಸೂರು ರಾಜ್ಯ][1] ದಲ್ಲಿ ತತ್ಕಾಲದಲ್ಲಿ ಒಳಗೊಂಡಿರುವ [2][ಎಲ್ಲ ರಾಜ್ಯಕ್ಷೇತ್ರಗಳು][2]][3] ಎಂಬ ಅರ್ಥವಿರತಕ್ಕದ್ದು;

[2][(24ಎ) " ಮೈಸೂರು ಅಧಿನಿಯಮ" ಎಂಬುದಕ್ಕೆ [XXX],-

(ಎ) ಸಂವಿಧಾನ (ಏಳನೇ ತಿದ್ದುಪಡಿ) ಅಧಿನಿಯಮ, 1956ರ ಪ್ರಾರಂಭಕ್ಕೆ ಮುಂಚೆ ಸಂವಿಧಾನದ ಅಡಿಯಲ್ಲಿ ಅಂಗೀಕರಿಸಲಾದ ಮೈಸೂರು ರಾಜ್ಯ ವಿಧಾನಮಂಡಲದ ಅಧಿನಿಯಮ;

(ಬಿ) ಸಂವಿಧಾನದ ಪ್ರಾರಂಭಕ್ಕೆ ಮುಂಚೆ ಅಂಗೀಕರಿಸಲಾದ ಮೈಸೂರು ರಾಜ್ಯ ವಿಧಾನಮಂಡಲದ ಒಂದು ಅಧಿನಿಯಮ; ಮತ್ತು

(ಸಿ) ಮೈಸೂರು ಮಹಾರಾಜರು ಸಂವಿಧಾನದ ಪ್ರಾರಂಭಕ್ಕೆ ಮುಂಚೆ ಮಾಡಿದ ಒಂದು ಅಧಿನಿಯಮ, [1][ಆದರೆ ಅದರಲ್ಲಿ ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ, 1899 (1899ರ ಕರ್ನಾಟಕ ಅಧಿನಿಯಮ III) ಮತ್ತು ಕರ್ನಾಟಕ ಉಚ್ಚ ನ್ಯಾಯಾಲಯ ಅಧಿನಿಯಮ, 1884 (1884ರ ಕರ್ನಾಟಕ ಅಧಿನಿಯಮ I) ಇವು ಒಳಗೊಳ್ಳುವುದಿಲ್ಲ;][1]][2]

[4][(24ಬಿ) "ಅಧಿಸೂಚನೆ" ಎಂದರೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲಾದ ಒಂದು ಅಧಿಸೂಚನೆ;][4]

(25) " ಪ್ರಮಾಣ ವಚನ " ಎಂಬುದು ಪ್ರಮಾಣ ಮಾಡುವ ಬದಲಾಗಿ ಪ್ರತಿಜ್ಞಾವಚನ ಮಾಡಲು ಅಥವಾ ಘೋಷಣೆ ಮಾಡಲು ಕಾನೂನು ಅನುಮತಿ ಕೊಟ್ಟಿರುವ ವ್ಯಕ್ತಿಗಳ ಸಂದರ್ಭದಲ್ಲಿ, ಪ್ರತಿಜ್ಞಾವಚನ ಮತ್ತು ಘೋಷಣೆಯನ್ನು ಒಳಗೊಳ್ಳತಕ್ಕದ್ದು;

(26) " ಅಪರಾಧ" ಎಂಬುದಕ್ಕೆ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಮೇರೆಗೆ ದಂಡನೀಯವಾದ ಯಾವುದೇ ಕೃತ್ಯ ಅಥವಾ ಲೋಪ ಎಂಬ ಅರ್ಥವಿರತಕ್ಕದ್ದು;

---

1. 1973ರ ಕರ್ನಾಟಕ ಕಾನೂನುಗಳ ಅಳವಡಿಕೆ ಆದೇಶದ ಮೂಲಕ 1.11.1973 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

2. 1956ರ ಮೈಸೂರು ಕಾನೂನುಗಳ ಅಳವಡಿಕೆ ಆದೇಶದ ಮೂಲಕ 1.11.1956 ರಿಂದ ಜಾರಿಗೆ ಬರುವಂತೆ ಅಳವಡಿಸಲಾಗಿದೆ.

3. 1953ರ ಅಧಿನಿಯಮ 12 ರ ಮೂಲಕ ಪ್ರತಿಯೋಜಿಸಲಾಗಿದೆ.

4. 1985ರ ಅಧಿನಿಯಮ ಸಂಖ್ಯೆ 9ರ ಮೂಲಕ 1.11.1956 ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ.

